# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 349

ಸದಸ್ಯರ ಹೆಸರು : ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 06-03-2020

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಯುವಜನ ಸಬಲೀಕರಣ ಹಾಗೂ ಕ್ರೀಡಾ ಇಲಾಖೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| 1. | ಕಾರವಾರ ಜಿಲ್ಲೆಯಲ್ಲಿ ಕಳೆದ 5 ವರ್ಷಗಳಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ಯಾವ ಯಾವ ಸಂಘ ಸಂಸ್ಥೆಗಳಿಗೆ ಎಷ್ಟು ಅನುದಾನ ಮಂಜೂರು ಮಾಡಲಾಗಿದೆ. ಅನುದಾನ ಮಂಜೂರು ಮಾಡಲು ಶಿಫಾರಸ್ಸು ಮಾಡಿರುವ ಮಾಹಿತಿಯನ್ನು ತಾಲ್ಲೂಕುವಾರು, ಜಿಲ್ಲಾವಾರು ಮಾಹಿತಿ ನೀಡುವುದು. | ಕಳೆದ 5 ವರ್ಷಗಳಲ್ಲಿ (2014-15, 2015-16, 2016-17, 2017-18 ಮತ್ತು 2018-19) ಉತ್ತರ ಕನ್ನಡ ಜಿಲ್ಲೆಗೆ ಅನುದಾನ ಬಿಡುಗಡೆ ಮಾಡಿರುವ ಸಂಘ ಸಂಸ್ಥೆಗಳ ವಿವರವನ್ನು ಅನುಬಂಧ-1 ಮತ್ತು 2 ರಲ್ಲಿ ಲಗತ್ತಿಸಿದೆ. |
| 2. | ಇಲಾಖೆ ವತಿಯಿಂದ ಸಂಘ ಸಂಸ್ಥೆಗಳಿಗೆ ಅನುದಾನ ಮಂಜೂರು ಮಾಡಲು ಇರುವ ನಿಯಮಾವಳಿಗಳೇನು. | ಮಾರ್ಗಸೂಚಿ ಪ್ರತಿ ಅನುಬಂಧ-3ರಲ್ಲಿ ಲಗತ್ತಿಸಿದೆ. |
| 3. | ಸದರಿ ನಿಯಮಾವಳಿಗಳನ್ನು ಪಾಲಿಸದಿರುವ ಸಂಸ್ಥೆಗಳಿಗೆ ಅನುದಾನ ಮಂಜೂರು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ. ಹಾಗಿದ್ದಲ್ಲಿ ನಿಯಮಾವಳಿಗಳನ್ನು ಪಾಲಿಸದೇ ಅನುದಾನ ಪಡೆದಿರುವ ಸಂಘ ಸಂಸ್ಥೆಗಳು ಯಾವುವು ಪಡೆದಿರುವ ಅನುದಾನವೆಷ್ಟು (ಕಳೆದ 3 ವರ್ಷಗಳ ಸಂಪೂರ್ಣ ವಿವರ ನೀಡುವುದು) | ಯಾವುದೇ ಸಂಘ ಸಂಸ್ಥೆಗಳಿಗೆ ನಿಯಮಾವಳಿ ಉಲ್ಲಂಘಿಸಿ ಅನುದಾನ ಬಿಡುಗಡೆ ಮಾಡಿರುವುದಿಲ್ಲ. |
| 4. | ಈ ಪ್ರಕರಣದಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು ನಿಯಮಾವಳಿಗಳನ್ನು ಪಾಲಿಸಿದಿರುವ ಸಂಘ ಸಂಸ್ಥೆಗಳಿಗೆ ಅನುದಾನ ಮಂಜೂರು ಮಾಡಿದ ಅಧಿಕಾರಿಗಳ ವಿರುದ್ಧ ಕೈಗೊಂಡ ಕ್ರಮಗಳೇನು ಸ್ಪಷ್ಟ ಮಾಹಿತಿ ಒದಗಿಸುವುದು. (ಬೀದರ್ ಜಿಲ್ಲೆಗೆ ಸಂಬಂಧ ಪಟ್ಟ ಮಾಹಿತಿ ನೀಡುವುದು.) | ಉದ್ಭವಿಸುವುದಿಲ್ಲ. |

ಸಂಖ್ಯೆ: ಕಸಂವಾ 14 ಕವಿಸ 2020

(ಸಿ.ಟಿ.ರವಿ)
ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ,
ಯುವಜನ ಸಬಲೀಕರಣ ಹಾಗೂ
ಕ್ರೀಡಾ ಇಲಾಖೆ ಸಚಿವರು.

ಅನುಬಂಧ -1

2014-15 ನೇ ಸಾಲಿನಲ್ಲಿ ಉತ್ತರ ಕನ್ನಡ ಜಿಲ್ಲೆ ವ್ಯಾಪ್ತಿಗೆ ಬರುವ ಸಂಘ ಸಂಸ್ಥೆಗಳಿಗೆ ಸಹಾಯ ಧನ ಬಿಡುಗಡೆ ಮಾಡಿರುವ ವಿವರ

ಸರ್ಕಾರದ ಆದೇಶ ಸಂಖ್ಯೆ:ಕಸಂವಾ/1071 ಕಸಧ 2014 ದಿನಾಂಕ:23.12.2014

| ಕ್ರ.ಸಂ | ಸಂಸ್ಥೆಯ ಹೆಸರು | ಬಿಡುಗಡೆ ಮಾಡಿದ ಮೊತ್ತ |
|---|---|---|
| 1. | ಶ್ರೀ ಇಡಗುಂಜಿ ಮಹಾಗಣಪತಿ ಯಕ್ಷಗಾನ ಮಂಡಳಿ. ಕೆರೆಮನೆ (ರಿ) ಹೊನ್ನಾವರ | 7.00,000.00 |
| 2. | ಸಂಕಲ್ಪ ಸೇವಾ ಸಂಸ್ಥೆ. ಯಲ್ಲಾಪುರ | 5.00,000.00 |
| 3. | ರಾಜರಾಜೇಶ್ವರಿ ರಂಗ ಸಮೂಹ. ಯಲ್ಲಾಪುರ | 1.00,000.00 |
| 4. | ರಂಗ ಸೌಗಂಧ ಟ್ರಸ್ಟ್ (ರಿ) ಸಿದ್ಧಪುರ | 2.50,000.00 |
| 5. | ಸಂಗಾತಿ ರಂಗಭೂಮಿ ಅಂಕೋಲಾ | 50,000.00 |
| 6. | ಶ್ರೀ ಅರುಣೋದಯ ಕಲಾ ನಿಕೇತನಾ (ರಿ). ಶಿರಸಿ | 1,00,000.00 |
| 7. | ಮೈತ್ರಿ ಕಲಾ ಬಳಗ (ರಿ) ತೇಲಂಗಾರ. ಯಲ್ಲಾಪುರ | 2.50,000.00 |
| 8. | ಕಲಾಭಾಸ್ಕರ (ರಿ) ಇಟಗಿ ಸಿದ್ದಾಪುರ | 1.50,000.00 |
| 9. | ಯಕ್ಷಚಂದನ. ಸಿದ್ದಾಪುರ | 75,000.00 |
| 10. | ಶ್ರೀ ಕೋಡಿಗದ್ದೆ ಮೂಕಾಂಬಿಕಾ ಯಕ್ಷಗಾನ ಕಲಾ ಸಂಘ (ರಿ). ಸಿದ್ದಾಪುರ | 1,00,000.00 |
| 11. | ಆತ್ಮೀಯ ಕಲಾವೇದಿಕೆ (ರಿ) ಕುಮಟಾ | 50,000.00 |
| 12. | ಕಲಾ ಸಿಂಚನ (ರಿ). ಸಿದ್ದಾಪುರ | 50,000.00 |
| 13. | ಶ್ರೀ ಮಹಾಗಣಪತಿ ಯಕ್ಷಗಾನ ಮಂಡಳಿ ಹಣಜಿಬೈಲ್ (ರಿ). ಸಿದ್ದಾಪುರ | 2,00,000.00 |
| 14. | ಬೆಳಗಸಲಿಗೆ ಯಕ್ಷಕಲಾ ಪ್ರತಿಷ್ಠಾನ. ಸಿದ್ದಾಪುರ | 1,00,000.00 |
| 15. | ಗೋಕುಲ ಬಾನ್ಸುರಿ ಗುರುಕುಲ ಟ್ರಸ್ಟ್ (ರಿ). ಯಲ್ಲಾಪುರ | 75,000.00 |
| 16. | ನಾದ ಸರಸ್ವತಿ ಕಲಾ ಸಂಗೀತ ಮತ್ತು ಸಾಂಸ್ಕೃತಿಕ ಸಂಘ (ರಿ). ಶಿರಸಿ | 1,00,000.00 |
| 17. | ಜನನಿ ಮ್ಯೂಸಿಕ್ ಸಂಸ್ಥೆ. ಶಿರಸಿ | 1.00,000.00 |
| 18. | ನಾಟ್ಯಾಂಜಲಿ ನೃತ್ಯ ಕಲಾ ಕೇಂದ್ರ. ಶಿರಸಿ | 1.50,000.00 |
| 19. | ಯಕ್ಷಲೋಕ ಹೊನ್ನಾವರ | 2.00,000.00 |
| 20. | ಯಕ್ಷಗಾನ ಸಂಶೋಧನಾ ಕೇಂದ್ರ. ಕುಮಟಾ | 1.00,000.00 |
| 21. | ಭಾರತಿ ನೃತ್ಯ ಕಲಾಕೇಂದ್ರ. ಯಲ್ಲಾಪುರ | 75,000.00 |
| 22. | ಅನಂತ ಸಾಂಸ್ಕೃತಿಕ ಪ್ರತಿಷ್ಠಾನ, ಯಲ್ಲಾಪುರ | 75.000.00 |
| 23. | ಒಡ್ಡೋಲಗ (ರಿ). ಹಿತ್ಲಕೈ. ಸಿದ್ದಾಪುರ | 75.000.00 |
| 24. | ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ. ಕಾರವಾರ | 75,000.00 |
| 25. | ಜೀವನ್ಮುಖಿ (ರಿ). ಶಿರಸಿ | 50,000.00 |
| 26. | ಗುರುಫೌಂಡೇಷನ್ (ರಿ) ಸಿದ್ದಾಪುರ | 50,000.00 |
| 27. | ಶ್ರೀ ಬಂಟದೇವ ಯುವಕ ಮಂಡಳಿ (ರಿ) | 50,000.00 |
| 28. | ಸಹಯಾನ ಟ್ರಸ್ಟ್. ಹೊನ್ನಾವರ | 2,00,000.00 |

## 2015-16ನೇ ಸಾಲಿನಲ್ಲಿ ಉತ್ತರ ಕನ್ನಡ ಜಿಲ್ಲೆ ವ್ಯಾಪ್ತಿಗೆ ಬರುವ ಸಂಘ ಸಂಸ್ಥೆಗಳಿಗೆ ಸಹಾಯ ಧನ ಬಿಡುಗಡೆ ಮಾಡಿರುವ ವಿವರ

| ಸರ್ಕಾರದ ಆದೇಶ ಸಂಖ್ಯೆ:ಕಸಂವಾ/564/ಕಸಧ/2015, ದಿನಾಂಕ:17-12-2015 | | |
|---|---|---|
| ಕ್ರ.ಸಂ | ಸಂಸ್ಥೆಯ ಹೆಸರು | ಬಿಡುಗಡೆ ಮಾಡಿದ ಮೊತ್ತ |
| 1. | ರಂಗ ಸೌಗಂಧ ಟ್ರಸ್ಟ್ (ರಿ) ಸಿದ್ಧಪುರ | 75,000.0 |
| 2. | ಗೋಕುಲ ಬಾನ್ಸುರಿ ಗುರುಕುಲ ಟ್ರಸ್ಟ್ (ರಿ), ಯಲ್ಲಾಪುರ | 75,000.0 |
| 3. | ಯಕ್ಷಚಂದನ, ಸಿದ್ದಾಪುರ | 75,000.0 |
| 4. | ಸಂಗಾತಿ ರಂಗಭೂಮಿ (ರಿ) | 50,000.0 |
| 5. | ಸಹಯಾನ (ರಿ) | 2,00,000.0 |
| 6. | ಮೈತ್ರಿ ಕಲಾ ಬಳಗ (ರಿ) ತೇಲಂಗಾರ, ಯಲ್ಲಾಪುರ | 2,50,000.0 |
| 7. | ಒಡ್ಡೋಲಗ (ರಿ), ಹಿತ್ಲಕೈ, ಸಿದ್ದಾಪುರ | 75,000.0 |
| 8. | ಶ್ರೀ ಬಂಟದೇವ ಯುವಕ ಮಂಡಳಿ (ರಿ) | 50,000.0 |
| 9. | ಯಕ್ಷಲೋಕ ಹೊನ್ನಾವರ | 2,00,000.0 |
| 10. | ರಾಜರಾಜೇಶ್ವರಿ ರಂಗ ಸಮೂಹ, ಯಲ್ಲಾಪುರ | 1,00,000.0 |
| 11. | ಕಲಾಭಾಸ್ಕರ (ರಿ) ಇಟಗಿ ಸಿದ್ದಾಪುರ | 1,50,000.0 |
| 12. | ಬೆಳಸಲಿಗೆ ಯಕ್ಷಕಲಾ ಪ್ರತಿಷ್ಠಾನ, ಸಿದ್ದಾಪುರ | 1,00,000.0 |
| 13. | ನಾಟ್ಯಾಂಜಲಿ ನೃತ್ಯ ಕಲಾ ಕೇಂದ್ರ, ಶಿರಸಿ | 1,50,000.0 |
| 14. | ಚಿಂತನ ರಂಗ ಅಧ್ಯಯನ ಕೇಂದ್ರ | 1,00,000.0 |
| 15. | ಪ್ರಯೋಗ ಸ್ವಯಂ ಸೇವಾ ಸಂಸ್ಥೆ, ಸಿದ್ದಾಪುರ | 50,000.0 |
| 16. | ಯಕ್ಷಗಾನ ಸಂಶೋಧನಾ ಕೇಂದ್ರ (ರಿ), ಕುಮಟಾ | 1,00,000.0 |
| 17. | ಶ್ರೀ ರಾಜರಾಜೇಶ್ವರಿ ಯಕ್ಷಗಾನ ಸಂಸ್ಥೆ, ಯಲ್ಲಾಪುರ | 75,000.0 |
| 18. | ಶ್ರೀ ಮಹಾಗಣಪತಿ ಯಕ್ಷಗಾನ ಮಂಡಳಿ ಹಣಜಿ ಬೈಲ್ (ರಿ), ಸಿದ್ದಾಪುರ | 2,00,000.0 |
| 19. | ಆತ್ಮೀಯ ಕಲಾವೇದಿಕೆ (ರಿ), ಕುಮಟಾ | 50,000.0 |
| 20. | ಕಲಾ ಸಿಂಚನ (ರಿ), ಸಿದ್ದಾಪುರ | 50,000.0 |
| 21. | ಕಲಾ ಸಿಂಚನ (ರಿ), ಸಿದ್ದಾಪುರ | 50,000.0 |
| 22. | ಪ್ರೇರಣಾ ಸಂಸ್ಥೆ (ರಿ) ಜೊಯಿಡಾ | 1,00,000.0 |
| 23. | ಶ್ರೀ ಇಡಗುಂಜಿ ಮಹಾಗಣಪತಿ ಯಕ್ಷಗಾನ ಮಂಡಳಿ, ಕೆರೆಮನೆ (ರಿ) ಹೊನ್ನಾವರ | 50,000.0 |
| 24. | ಶ್ರೀ ಕೋಡಿಗದ್ದೆ ಮೂಕಾಂಬಿಕಾ ಯಕ್ಷಗಾನ ಕಲಾ ಸಂಘ (ರಿ), ಸಿದ್ದಾಪುರ | 1,00,000.0 |
| 25. | ನಾಗ್ವೆ ಎಜುಕೇಷನಲ್ ಫೌಂಡೇಷನ್ ಅಂಡ್ ಸೋಷಿಯಲ್ ವೆಲ್‌ಫೇರ್ ಮಹಿಳಾ ಅಸೋಸಿಯೇಷನ್, ಅಂಕೋಲಾ | 50.000.0 |
| 26. | ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ, ಕಾರವಾರ | 75,000.0 |

2016-17 ನೇ ಸಾಲಿನಲ್ಲಿ ಉತ್ತರ ಕನ್ನಡ ಜಿಲ್ಲೆ ವ್ಯಾಪ್ತಿಗೆ ಬರುವ ಸಂಘ ಸಂಸ್ಥೆಗಳಿಗೆ ಸಹಾಯ ಧನ ಬಿಡುಗಡೆ ಮಾಡಿರುವ ವಿವರ

| ಸರ್ಕಾರದ ಆದೇಶ ಸಂಖ್ಯೆ:ಕಸಂವಾ/114/ಕಸಧ/2017, ದಿನಾಂಕ:21-02-2017 | | |
|---|---|---|
| ಕ್ರ.ಸಂ | ಸಂಸ್ಥೆಯ ಹೆಸರು | ಬಿಡುಗಡೆ ಮಾಡಿದ ಮೊತ್ತ |
| 1. | ಕಲಾ ಸಿಂಚನ (ರಿ), ಸಿದ್ದಾಪುರ | 50,000.00 |
| 2. | ಶ್ರೀ ಮಹಾಗಣಪತಿ ಯಕ್ಷಗಾನ ಮಂಡಳಿ ಹಣಜಿ ಬೈಲ್ (ರಿ), ಸಿದ್ದಾಪುರ | 1,00,000.00 |
| 3. | ಭಾರತಿ ನೃತ್ಯ ಕಲಾಕೇಂದ್ರ, ಯಲ್ಲಾಪುರ | 1,00,000.00 |
| 4. | ಗೋಕುಲ ಬಾನ್ಸುರಿ ಗುರುಕುಲ ಟ್ರಸ್ಟ್ (ರಿ), ಯಲ್ಲಾಪುರ | 1,00,000.00 |
| 5. | ಮೈತ್ರಿ ಕಲಾ ಬಳಗ (ರಿ) ತೇಲಂಗಾರ, ಯಲ್ಲಾಪುರ | 3,00,000.00 |
| 6. | ಕಲಾಭಾಸ್ಕರ (ರಿ) ಇಟಗಿ ಸಿದ್ದಾಪುರ | 1,50,000.00 |
| 7. | ಯಕ್ಷಚಂದನ (ರಿ), ದಂಟಕಲ್ | 1,00,000.00 |
| 8. | ಒಡ್ಡೋಲಗ (ರಿ), ಹಿತ್ಲಕೈ, ಸಿದ್ದಾಪುರ | 1,00,000.00 |
| 9. | ಶ್ರೀ ಇಡಗುಂಜಿ ಮಹಾಗಣಪತಿ ಯಕ್ಷಗಾನ ವೇಷಭೂಷಣ ಮಂಡಳಿ, (ರಿ) | 75,000.00 |
| 10. | ಜನನಿ ಮ್ಯೂಸಿಕ್ ಸಂಸ್ಥೆ, ಶಿರಸಿ | 1,00,000.00 |
| 11. | ಶ್ರೀ ಮಹಿಷಾಸುರ ಮರ್ದಿನಿ ಯಕ್ಷಕಲಾ ಪ್ರತಿಷ್ಠಾನ (ರಿ) | 1,00,000.00 |
| 12. | ನಾಟ್ಯರಾಣಿ ಭರತನಾಟ್ಯ ನೃತ್ಯ ಕಲಾಕೇಂದ್ರ ಸಮಿತಿ (ರಿ) | 50,000.00 |
| 13. | ಪ್ರೇರಣಾ ಸಂಸ್ಥೆ (ರಿ) ಗುಂದ್ ಜೊಯಿಡಾ | 1,00,000.00 |
| 14. | ಸುಧಾ ಚರಿಟೆಬಲ್ ಫೌಂಡೇಷನ್ (ರಿ) ಜೋಯಿಡಾ | 1,50,000.00 |
| 15. | ಶ್ರೀ ಕೋಡಿಗದ್ದೆ ಮೂಕಾಂಬಿಕಾ ಯಕ್ಷಗಾನ ಕಲಾ ಸಂಘ (ರಿ) | 1,00,000.00 |
| 16. | ಸುಷಿರ ಸಂಗೀತ ಪರಿವಾರ (ರಿ) | 50,000.00 |
| 17. | ಯಕ್ಷಗಾನ ಸಂಶೋಧನಾ ಕೇಂದ್ರ, ಕುಮಟಾ | 1,00,000.00 |
| 18. | ಯಕ್ಷಲೋಕ | 3,00,000.00 |
| 19. | ಶ್ರೀ ಅನಂತ ಯಕ್ಷಕಲಾ ಪ್ರತಿಷ್ಠಾನ (ರಿ) ಸಿದ್ದಾಪುರ | 1,00,000.00 |
| 20. | ಶ್ರೀ ಭಾರತ ಮಾತಾ ಮಂದಿರ ಸಂಸ್ಥಾನ (ರಿ) | 1,00,000.00 |
| 21. | ಸ್ವರಾಂಜಲಿ | 50,000.00 |
| 22. | ಶ್ರೀ ರಾಜರಾಜೇಶ್ವರಿ ರಂಗ ಸಮೂಹ, ಮಂಚೀಕೇರಿ | 50,000.00 |
| 23. | ಸಂಕಲ್ಪ ಸೇವಾ ಸಂಸ್ಥೆ, | 3,00,000.00 |
| 24. | ಜೀವನ್ಮುಖಿ (ರಿ), ಶಿರಸಿ | 1,00,000.00 |
| 25. | ನಾಟ್ಯಾಂಜಲಿ ನೃತ್ಯ ಕಲಾ ಕೇಂದ್ರ, ಶಿರಸಿ | 2,00,000.00 |
| 26. | ಶ್ರೀ ಗುರು ಜಿಲ್ಲಾ ರಂಗಭೂಮಿ ಕಲಾವಿದರ ವೇದಿಕೆ ಉತ್ತರ ಕನ್ನಡ (ರಿ) | 50,000.00 |
| 27. | ರಂಗ ಸೌಗಂಧ ಟ್ರಸ್ಟ್ (ರಿ) ಸಿದ್ದಪುರ | 1,00,000.00 |
| 28. | ಸಹಯಾನ ಟ್ರಸ್ಟ್, (ಡಾ.ಆರ್.ವಿ.ಭಂಡಾರಿ ನೆನಪಿನ ಸಂಸ್ಕೃತಿ ಅಧ್ಯಯನ ಕೇಂದ್ರ) | 1,50,000.00 |
| 29. | ಚಿಂತನ ರಂಗ ಅಧ್ಯಯನ ಕೇಂದ್ರ (ರಿ) | 1,00,000.00 |

| | | |
|---|---|---|
| 30. | Shabara | 1,00,000.00 |
| 31. | ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ ಕಾರವಾರ | 1,00,000.00 |
| 32. | ಇಡಗುಂಜಿ ಮಹಾಗಣಪತಿ ಯಕ್ಷಗಾನ ಮಂಡಳಿ | 8,00,000.00 |

**2017-18ನೇ ಸಾಲಿನಲ್ಲಿ ಉತ್ತರ ಕನ್ನಡ ಜಿಲ್ಲೆ ವ್ಯಾಪ್ತಿಗೆ ಬರುವ ಸಂಘ ಸಂಸ್ಥೆಗಳಿಗೆ ಸಹಾಯ ಧನ ಬಿಡುಗಡೆ ಮಾಡಿರುವ ವಿವರ**

| ಸರ್ಕಾರದ ಆದೇಶ ಸಂಖ್ಯೆ:ಕಸಂವಾ 513 ಕಸಧ 2018 ದಿನಾಂಕ:24.01.2018 | | |
|---|---|---|
| ಕ್ರ.ಸಂ | ಸಂಸ್ಥೆಯ ಹೆಸರು | ಬಿಡುಗಡೆ ಮಾಡಿದ ಮೊತ್ತ |
| 1. | ಶ್ರೀ ಇಡಗುಂಜಿ ಮಹಾಗಣಪತಿ ಯಕ್ಷಗಾನ ಮಂಡಳಿ ಕೆರೆಮನೆ (ರಿ) | 1000000 |
| 2. | ಶ್ರೀ ಮಹಿಷಾಸುರಮರ್ಧಿನಿ ಯಕ್ಷಕಲಾ ಪ್ರತಿಷ್ಠಾನ(ರಿ.) | 100000 |
| 3. | atmeeya kala vedike | 50,000 |
| 4. | Kalasinchana | 50,000 |
| 5. | ಕಲಾಭಾಸ್ಕರ(ರಿ) ಇಟಗಿ | 50,000 |
| 6. | Sree Mahaganapati Yakshagana Mandali | 3,00,000 |
| 7. | ಪ್ರೇರಣ ಸಂಸ್ಥೆ.ಗುಂಡ | 1,00,000 |
| 8. | ಯಕ್ಷಚಂದನ (ರಿ) ದಂಟಕಲ್ | 1,00,000 |
| 9. | ಶ್ರೀ ಕೋಡಿಗದ್ದೆ ಮೂಕಾಂಬಿಕಾ ಯಕ್ಷಗಾನ ಕಲಾ ಸಂಘ (ರಿ.) | 1,00,000 |
| 10. | ಝೇಂಕಾರ್ ಮೆಲೋಡಿಸ್ ಆರ್ಟ್ಸ್ ಅಸೋಸಿಯೇಷನ್ | 1,00,000 |
| 11. | ಬೆಳಸಲಿಗೆ ಯಕ್ಷಕಲಾ ಪ್ರತಿಷ್ಠಾನ (ರಿ) ಬೆಳಸಲಿಗೆ | 50,000 |
| 12. | ಒಡ್ಡೋಲಗ | 1,00,000 |
| 13. | ಸ್ವರಾಂಜಲಿ | 50,000 |
| 14. | ಅಮದಳ್ಳಿ ಜಾನಪದ ಉತ್ಸವ ಸಮಿತಿ | 2,00,000 |
| 15. | ಶ್ರೀ ಅನಂತ ಯಕ್ಷಕಲಾ ಪ್ರತಿಷ್ಠಾನ (ರಿ) ಸಿದ್ದಾಪುರ | 1,00,000 |
| 16. | ನಾಟ್ಯಾಂಜಲಿ ನೃತ್ಯ ಕಲಾ ಕೇಂದ್ರ | 1,00,000 |
| 17. | SHRI RAJARAJESHWARI YAKSHAGANA SAMSTHE(R) MANCHIKERI | 50,000 |
| 18. | ಗೋಕುಲ ಬಾನ್ಸುರಿ ಗುರುಕುಲ ಟ್ರಸ್ಟ್ (ರಿ.) | 1,00,000 |
| 19. | ಯಕ್ಷಲೋಕ | 2,50,000 |
| 20. | ಜನನಿ ಮ್ಯುಸಿಕ್ ಸಂಸ್ಥೆ (ರಿ) ಸಿರ್ಸಿ | 1,00,000 |
| 21. | ಸಂಹಿತಾ ಮ್ಯೂಸಿಕ್ ಫೋರಮ್ (ರಿ)ಶಿರಸಿ | 50,000 |
| 22. | SUPA CHARITABLE FOUNDATION(R) JOIDA UTTAR KANNADA | 1,00,000 |
| 23. | ಯಕ್ಷಗಾನ ಸಂಶೋಧನಾ ಕೇಂದ್ರ (ರಿ) | 50,000 |
| 24. | ಮಹಾಗಣಪತಿ ಕ್ರೀಡಾ ಹಾಗೂ ಸಾಂಸ್ಕೃತಿಕ ಸಂಘ | 50,000 |
| 25. | ಸುಷಿರ ಸಂಗೀತ ಪರಿವಾರ (ರಿ) | 50,000 |
| 26. | ರಂಗಸೌಗಂದ ಟ್ರಸ್ಟ್ | 50,000 |
| 27. | ಸಹಯಾನ ಟ್ರಸ್ಟ್ (ಡಾ. ಆರ್.ವಿ.ಭಂಡಾರಿ ನೆನಪಿನ ಸಂಸ್ಕೃತಿ ಅಧ್ಯಯನ ಕೇಂದ್ರ) | 1,50,000 |
| 28. | ಇಬ್ಬನಿ ಫೌಂಡೇಷನ್ | 50,000 |
| 29. | ಚಿಂತನ ರಂಗ ಅಧ್ಯಾಯನ ಕೇಂದ್ರ | 50,000 |

2018-19ನೇ ಸಾಲಿನಲ್ಲಿ ಉತ್ತರ ಕನ್ನಡ ಜಿಲ್ಲೆ ವ್ಯಾಪ್ತಿಗೆ ಬರುವ ಸಂಘ ಸಂಸ್ಥೆಗಳಿಗೆ ಸಹಾಯ ಧನ ಬಿಡುಗಡೆ ಮಾಡಿರುವ ವಿವರ

| ಸರ್ಕಾರದ ಆದೇಶ ಸಂಖ್ಯೆ:ಕಸಂವಾ 228 ಕಸಧ 2019 ದಿನಾಂಕ:15.07.2019 | | |
|---|---|---|
| ಕ್ರ.ಸಂ | ಸಂಸ್ಥೆಯ ಹೆಸರು | ಬಿಡುಗಡೆ ಮಾಡಿದ ಮೊತ್ತ |
| 1. | ಶ್ರೀ ಇಡಗುಂಜಿ ಮಹಾಗಣಪತಿ ಯಕ್ಷಗಾನ ಮಂಡಳಿ ಕೆರೆಮನೆ (ರಿ) | 1000000 |
| 2. | SUPA CHARITABLE FOUNDATION(R) JOIDA UTTAR KANNADA | 200000 |
| 3. | ಗೋಕುಲ ಬಾನ್ಸುರಿ ಗುರುಕುಲ ಟ್ರಸ್ಟ್ (ರಿ.) | 100000 |
| 4. | Shri Mahaganapati Yakshagana Mandali Hanajibail | 300000 |
| 5. | ಯಕ್ಷಲೋಕ | 300000 |
| 6. | Shree Ananta YakshaKala Prathistan siddapur | 50000 |
| 7. | ನಾದಶಂಕರ | 50000 |
| 8. | ಪದ್ಮಶ್ರೀ ಚಿಟ್ಟಾಣಿ ಯಕ್ಷಕಲಾ ಕೇಂದ್ರ ಟ್ರಸ್ಟ್ (ರಿ) | 50000 |
| 9. | ರಂಗಸೌಗಂಧ ಟ್ರಸ್ಟ್ (ರಿ.) | 100000 |
| 10. | SHABARA | 50000 |
| 11. | ಝೇಂಕಾರ್ ಮೆಲೋಡೀಸ್ ಆರ್ಟ್ ಅಸೋಸಿಯೇಶನ್ (ರಿ) | 50000 |
| 12. | Yaksha Shalmala | 1000000 |
| 13. | ಯಕ್ಷಗಾನ ಸಂಶೋಧನಾ ಕೇಂದ್ರ | 100000 |
| 14. | SWARANJALI [R] | 50000 |
| 15. | ಶ್ರೀ ಕೋಡಿಗದ್ದೆ ಮೂಕಾಂಬಿಕಾ ಯಕ್ಷಗಾನ ಕಲಾ ಸಂಘ (ರಿ) ದೊಡ್ಮನೆ | 100000 |
| 16. | ಸುಷಿರ ಸಂಗೀತ ಪರಿವಾರ (ರಿ) | 50000 |
| 17. | ಶ್ರೀ ಹುಲಿಸಿದ್ಧೇಶ್ವರ ಯಕ್ಷ ನೃತ್ಯ ಕಲಾ ಬಳಗ ರಿ | 50000 |
| 18. | ಯಕ್ಷಚಂದನ | 100000 |
| 19. | ಕಲಾಭಾಸ್ಕರ (ರಿ) ಇಟಗಿ | 100000 |
| 20. | SHREE BHARAT MATA MANDIR SAMSTAN (R) | 100000 |
| 21. | SHRI RAJARAJESHWARI YAKSHAGANA SAMSTHE(R) MANCHIKERI | 50000 |
| 22. | PRERANA SAMSTE(R) GUND JOIDA U.K | 100000 |
| 23. | SAMHITA MUSIC FORUM (R) | 50000 |
| 24. | shambhu shishya yakshgana pratistana siddapura | 50000 |
| 25. | ಒಡ್ಡೋಲಗ(ರಿ.) ಹಿತ್ಲಕೈ | 200000 |
| 26. | ಸಂಕಲ್ಪ ಸೇವಾ ಸಂಸ್ಥೆ | 100000 |
| 27. | ಭಾರತಿ ನೃತ್ಯ ಕಲಾ ಕೇಂದ್ರ ಸಮಿತಿ (ರಿ) ಯಲ್ಲಾಪುರ | 50000 |
| 28. | ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ ಕಾರವಾರ (ಉ.ಕ) | 50000 |

# ಅನುಬಂಧ-2

ಕಾರವಾರ ಜಿಲ್ಲೆಯಲ್ಲಿ ಕಳೆದ 5 ವರ್ಷಗಳಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ
ಸಂಘ ಸಂಸ್ಥೆಗಳಿಗೆ ಬಿಡುಗಡೆಯಾದ ಅನುದಾನದ ವಿವರ

ವಿಶೇಷ ಘಟಕ ಯೋಜನೆ

| ಕ್ರ. ಸಂ. | ವಿವರ | 2014-15 | 2015-16 | 2016-17 | 2017-18 | 2018-19 |
|---|---|---|---|---|---|---|
| 1 | ಕಲ್ಪನಾ ರಶ್ಮಿ ಕಲಾಲೋಕ,<br>ಅಂಕೋಲೆಕಾರ ಬಿಲ್ಡಿಂಗ್ 1 ಫ್ಲೋರ್ ನಿಯರ್<br>ರಾಧಾಕರಿಸ್‌ನ ಟೆಂಪಲ್ ಮೇನ್ ರೋಡ್<br>ಕಾರ್‌ವರ್ 581301, ಮೊ:9448105291 | - | 100000 | - | - | - |
| 2 | ಆಶಾಕಿರಣ ಟ್ರಸ್ಟ (ರಿ),<br>ಹಾಳದಕಟ್ಟಾ, ಪೋ: ಕೊಂಡ್ಲಿ, ಸಿದ್ದಾಪುರ,<br>ಉತ್ತರ ಕನ್ನಡ, ಮೊ:9448076809 | - | 100000 | - | - | - |
| | ಒಟ್ಟು | - | 200000 | - | - | - |

- ಗಿರಿಜನ ಉಪಯೋಜನೆಯಡಿ ಕಾರವಾರ ಜಿಲ್ಲೆಗೆ ಸಂಬಂಧಿಸಿದಂತೆ ಕಳೆದ 5 ವರ್ಷಗಳಲ್ಲಿ ಯಾವ ಸಂಸ್ಥೆಗಳು ಆಯ್ಕೆಯಾಗಿರುವುದಿಲ್ಲ

ಅನುಬಂಧ - 3

**ಸರ್ಕಾರದ ಆದೇಶ ಸಂಖ್ಯೆ ಕಸಂವಾ 253 ಕಸಧ 2017, ಬೆಂಗಳೂರು ದಿನಾಂಕ:03.07.2017**

## ಅನುಬಂಧ– 1

## ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಸಂಘ-ಸಂಸ್ಥೆಗಳಿಗೆ ಪ್ರೋತ್ಸಾಹ ಧನಸಹಾಯ ನೀಡಲು ಅನುಸರಿಸಬೇಕಾದ ಮಾರ್ಗಸೂಚಿಗಳು

1. ಧನಸಹಾಯ ಪಡೆಯುವ ಸಂಘ–ಸಂಸ್ಥೆಗಳು ಅಥವಾ ಟ್ರಸ್ಟುಗಳು ಕಲೆ, ಸಾಹಿತ್ಯ ಮತ್ತು ಸಾಂಸ್ಕೃತಿಕ ಉದ್ದೇಶದಿಂದಲೇ ರಚಿತವಾಗಿ ಚಟುವಟಿಕೆ ನಡೆಸುತ್ತಿರಬೇಕು. ವಿವಿಧೋದ್ದೇಶ ಚಟುವಟಿಕೆ ಹೊಂದಿರುವ ಸಂಘ– ಸಂಸ್ಥೆಗಳು/ಟ್ರಸ್ಟುಗಳನ್ನು ಪರಿಗಣಿಸಲು ಅವಕಾಶವಿಲ್ಲ.
2. ನಿರಂತರವಾಗಿ ಕಲೆ, ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆ ನಡೆಸುವ ಸಂಘ–ಸಂಸ್ಥೆಗಳು/ಟ್ರಸ್ಟುಗಳು ನಿಯಮಾನುಸಾರ ನೋಂದಣಿ ಕಾಯಿದೆ ನಿಯಮಗಳ ಪ್ರಕಾರ ಕಡ್ಡಾಯವಾಗಿ ನೋಂದಣಿಯಾಗಿರಬೇಕು. ಹೊರರಾಜ್ಯ ಮತ್ತು ಹೊರದೇಶಗಳ ಕನ್ನಡ ಸಂಘ–ಸಂಸ್ಥೆಗಳು ಆಯಾ ಪ್ರದೇಶಗಳ ಸಂಘ–ಸಂಸ್ಥೆಗಳ ನೋಂದಣಿ ಕಾಯಿದೆಯಡಿ ನೋಂದಣಿಯಾಗಿರಬೇಕು. ನೋಂದಣಿಯಾಗಿ ಕನಿಷ್ಠ ಎರಡು ವರ್ಷ ಪೂರೈಸಿರಬೇಕು. ಪರಿಶಿಷ್ಟ ವರ್ಗ/ಪರಿಶಿಷ್ಟ ಪಂಗಡಗಳ ಸಂಘ–ಸಂಸ್ಥೆಗಳು ಕನಿಷ್ಠ ಒಂದು ವರ್ಷ ಪೂರೈಸಿರಬೇಕು.
3. ಸಂಘ–ಸಂಸ್ಥೆಗಳ ಪದಾಧಿಕಾರಿಗಳಲ್ಲಿ ಕಡ್ಡಾಯವಾಗಿ ನಾಲ್ಕು ಜನ ಸಾಹಿತ್ಯ–ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದವರಾಗಿರಬೇಕು. ಪರಿಶಿಷ್ಟವರ್ಗ/ಪರಿಶಿಷ್ಟ ಪಂಗಡಗಳ ಸಂಘ–ಸಂಸ್ಥೆಗಳ ಎಲ್ಲಾ ಪದಾಧಿಕಾರಿಗಳು ಆಯಾ ಸಮುದಾಯಕ್ಕೆ ಸೇರಿದವರೇ ಆಗಿರಬೇಕು. ಆನ್‌ಲೈನ್ ಜಾತಿ ಪ್ರಮಾಣ ಪತ್ರದ ಆರ್.ಡಿ. ಸಂಖ್ಯೆಯನ್ನು ಕಡ್ಡಾಯವಾಗಿ ನಮೂದಿಸಬೇಕು.
4. ಈ ಯೋಜನೆಯು ಸಾಂಸ್ಕೃತಿಕ ಉದ್ದೇಶಕ್ಕೆ ಮಾತ್ರ, ನಿರಂತರ ವರ್ಷಪೂರ್ತಿ ಚಟುವಟಿಕೆಗೆ ಹಾಗೂ ಸಂಸ್ಥೆಯನ್ನು ಸಾಂಸ್ಕೃತಿಕವಾಗಿ ಬಲಪಡಿಸಲು ನೀಡುವ ಧನಸಹಾಯವೇ ಹೊರತು ಕೇವಲ ಈ ವರ್ಷ ಮಾಡಲು ಉದ್ದೇಶಿಸಿರುವ ಯಾವುದೇ ಒಂದು ಕಾರ್ಯಕ್ರಮಕ್ಕೆ ನೀಡುವ ಕಾರ್ಯಕ್ರಮದ ಮೊತ್ತವಲ್ಲ.
5. ಪ್ರಸಕ್ತ ಆರ್ಥಿಕ ವರ್ಷದಲ್ಲಿ ನೀಡುವ ಧನಸಹಾಯದ ಮೊತ್ತವನ್ನು ಹಿಂದಿನ ಆರ್ಥಿಕ ವರ್ಷದಲ್ಲಿ ಸಂಸ್ಥೆಯು ನಡೆಸಿದ ನಿರಂತರ ಚಟುವಟಿಕೆಗಳನ್ನು ಆಧರಿಸಿ ನಿಗದಿಪಡಿಸಲಾಗುವುದು.
6. ಸಂಸ್ಥೆಯು ಆಯೋಜಿಸುವ ಪ್ರಶಸ್ತಿ ಪ್ರದಾನ, ಸನ್ಮಾನ ಕಾರ್ಯಕ್ರಮಗಳಿಗೆ ಮಾಡುವ ವೆಚ್ಚವನ್ನು ಸಾಂಸ್ಕೃತಿಕ ಕಾರ್ಯಕ್ರಮವಾಗಿ ಪರಿಗಣಿಸುವುದಿಲ್ಲ.
7. ಅರ್ಜಿ ಸಲ್ಲಿಸಿದ ಮಾತ್ರಕ್ಕೆ ಪ್ರೋತ್ಸಾಹ ಧನಸಹಾಯ ನೀಡಲಾಗುವುದು ಎಂಬುದು ಕಡ್ಡಾಯವಲ್ಲ. ಸಮಿತಿಯ ನಿರ್ಧಾರವೇ ಅಂತಿಮ ಹಾಗೂ ಲಭ್ಯ ಅನುದಾನಕ್ಕನುಗುಣವಾಗಿ ನೀಡಲಾಗುವುದು.
8. ಸಮಿತಿಯು ಆಯ್ಕೆ ಮಾಡಿ, ಮೊತ್ತ ನಿಗದಿಪಡಿಸಿ, ನಡಾವಳಿ ಅನುಮೋದಿಸಿದ ನಂತರ ಅನುದಾನ ಬಿಡುಗಡೆಗೆ ಕ್ರಮವಹಿಸುವುದು.
9. ಧನಸಹಾಯ ಪಡೆಯುವ ಸಂಸ್ಥೆಯು ನಡೆಸುವ ಸಾಂಸ್ಕೃತಿಕ ಚಟುವಟಿಕೆಗಳ ಸಂಘಟನಾ ವೆಚ್ಚ, ಸಂಭಾವನೆ ಮತ್ತಿತರ ರೂ.5,000/–ಗಳಿಗೆ ಮೀರಿದಎಲ್ಲ ವೆಚ್ಚಗಳನ್ನು ಕಡ್ಡಾಯವಾಗಿ ಬ್ಯಾಂಕ್‌ಅಕೌಂಟ್ ಪೇಯಿ ಚೆಕ್ ಮೂಲಕವೇ ಪಾವತಿಸಬೇಕು.
10. ಧನಸಹಾಯ ಪಡೆಯಲಿಚ್ಛಿಸುವ ಸಂಸ್ಥೆಯು ಸ್ವತಂತ್ರವಾಗಿ ಕಾರ್ಯಕ್ರಮ ರೂಪಿಸಿ ಅನುಷ್ಠಾನಗೊಳಿಸಿದ ಕಾರ್ಯಕ್ರಮಗಳನ್ನು ಮಾತ್ರ ಪರಿಗಣಿಸಲಾಗುವುದು. ಹಾಗೂ ಇತರಸಂಸ್ಥೆಗಳ ಸಹಯೋಗದೊಂದಿಗೆ ಆಯೋಜಿಸಿದ ಕಾರ್ಯಕ್ರಮಗಳನ್ನು ಪರಿಗಣಿಸಲಾಗುವುದಿಲ್ಲ.
11. ಲಭ್ಯ ಅನುದಾನದಲ್ಲಿ ಪ್ರಾದೇಶಿಕವಾರು ಆದ್ಯತೆ ನೀಡಲಾಗುವುದು.
12. ಸಂಘ–ಸಂಸ್ಥೆಗಳು ಕನ್ನಡ ಭಾಷೆ, ಸಾಹಿತ್ಯ, ಸಂಗೀತ, ನೃತ್ಯ, ನಾಟಕ, ಜನಪದ, ಯಕ್ಷಗಾನ, ಚಿತ್ರಕಲೆ, ಶಿಲ್ಪಕಲೆ, ಮುಂತಾದ ಸೃಜನಶೀಲ ಕಲಾಪ್ರಕಾರಗಳಲ್ಲಿ ನಿರಂತರ ಚಟುವಟಿಕೆ ನಡೆಸಿರುವ ಬಗ್ಗೆ ಹಿಂದಿನ ವರ್ಷದ ಚಟುವಟಿಕೆಗಳ ವಿವರ ಮತ್ತು ಧನಸಹಾಯಕ್ಕಾಗಿ ಅರ್ಜಿ ಸಲ್ಲಿಸುವ ವರ್ಷದ ಯೋಜನೆಗಳ ಸಂಕ್ಷಿಪ್ತವಿವರ ಸಲ್ಲಿಸಬೇಕು ಮತ್ತು ಸಂಸ್ಥೆಯು ಸ್ಥಾಪನೆಯಾದಾಗಿನಿಂದ ಕೈಗೊಂಡ ಒಟ್ಟಾರೆ ಕಾರ್ಯಚಟುವಟಿಕೆಯ ಸಮಗ್ರ ಪರಿಚಯ ನೀಡುವ ಸಂಕ್ಷಿಪ್ತ ಟಿಪ್ಪಣಿಯನ್ನು ಸಹ ಸಲ್ಲಿಸಬೇಕು.
13. ಧನಸಹಾಯ ಪಡೆಯುವ ಸಂಸ್ಥೆಗಳ ಕಾರ್ಯಚಟುವಟಿಕೆಯ ಮೌಲ್ಯಮಾಪನದ ಸಂದರ್ಭದಲ್ಲಿ ಅವುಗಳ ಕಾರ್ಯಕ್ರಮಗಳ ನಾವೀನ್ಯತೆ, ವೈಶಿಷ್ಟ್ಯತೆ, ಪ್ರಯೋಗಾತ್ಮಕ ಸಾಧ್ಯತೆ, ವಿಶೇಷ ವಿಷಯ ವಸ್ತುವಿನ ಮೇಲೆ ಆಧಾರಿತವಾದ ಶಿಬಿರಗಳು, ಕಮ್ಮಟಗಳು, ಕಾರ್ಯಾಗಾರಗಳು, ಹೊಸ ಆವಿಷ್ಕಾರಗಳು, ಯುವ ಪ್ರತಿಭೆಗಳಿಗೆ ಪ್ರೋತ್ಸಾಹ, ವಿಕಲಚೇತನರಿಗೆ, ಮಹಿಳೆ ಮತ್ತು ಮಕ್ಕಳ ಕಾರ್ಯಕ್ರಮಗಳು ಪ್ರೋತ್ಸಾಹ, ಮುಂತಾದ ಕ್ರಿಯಾತ್ಮಕ ಮತ್ತು ಗುಣಾತ್ಮಕವಾಗಿ ರೂಪಿತವಾದ ಕಾರ್ಯಚಟುವಟಿಕೆಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗುವುದು.

14. ಧನಸಹಾಯ ಮಂಜೂರಾತಿ ಸಂದರ್ಭದಲ್ಲಿ ರಾಜ್ಯ ಸಮಿತಿಯು ಈ ಕೆಳಕಂಡ ಅಂಶಗಳನ್ನು ಪರಿಗಣಿಸಿ ಧನಸಹಾಯ ನಿಗದಿ ಪಡಿಸಲು ಕ್ರಮವಹಿಸುವುದು.

ಅ. ಸಂಸ್ಥೆಯ ಮೂಲಕ ಸಾಂಸ್ಕೃತಿಕ ಕ್ಷೇತ್ರದಲ್ಲಿ ತಯಾರಾದ ಹೊಸ ಕಲಾವಿದರ ಸಂಖ್ಯೆ

ಆ. ಸಂಸ್ಥೆಯು ಸಿದ್ಧಪಡಿಸಿದ ಹೊಸ ರಂಗರೂಪಕಗಳು, ನೃತ್ಯ ರೂಪಕಗಳು ಮತ್ತು ಪ್ರಯೋಗಗಳು.

ಇ. ಸಂಸ್ಥೆಯ ಕಾರ್ಯಚಟುವಟಿಕೆಯ ನಿರಂತರತೆ ಮತ್ತು ಗುಣಾತ್ಮಕತೆ.

ಈ. ಕಾರ್ಯಕ್ರಮಗಳಲ್ಲಿ ವಿನೂತನ ಪ್ರಯೋಗಶೀಲತೆ ಮತ್ತು ನಾವೀನ್ಯತೆ.

ಉ. ವಿವಿಧ ಸೃಜನಶೀಲ ಕ್ಷೇತ್ರಗಳಲ್ಲಿ ಸಾಂಸ್ಕೃತಿಕ ದಾಖಲೀಕರಣಕ್ಕೆ ಸಂಸ್ಥೆಯ ಕೊಡುಗೆ

ಊ. ಮಹಿಳೆಯರನ್ನು, ಮಕ್ಕಳನ್ನು, ಅಂಗವಿಕಲರು ಹಾಗೂ ಇತರರನ್ನು ಗಮನದಲ್ಲಿರಿಸಕೊಂಡು ರೂಪಿಸಲಾದ ಸಾಂಸ್ಕೃತಿಕ ಯೋಜನೆಗಳು

ಋ. ಯುವ ಮತ್ತು ಉದಯೋನ್ಮುಖ ಕಲಾವಿದರಿಗೆ ವೇದಿಕೆ.

15. ಧನಸಹಾಯ ಪಡೆಯಲಿಚ್ಛಿಸುವ ಸಂಸ್ಥೆಗಳು ಸಂಘ ಸಂಸ್ಥೆಗಳ ನೋಂದಣಾಧಿಕಾರಿಗಳಿಗೆ ಸಲ್ಲಿಸುವ ಚಾರ್ಟರ್ಡ್ ಅಕೌಂಟೆಂಟ್ ಅವರಿಂದ ಲೆಕ್ಕ ಪರಿಶೋಧಿತ ಮತ್ತು ದೃಢೀಕೃತ ಲೆಕ್ಕಪಟ್ಟಿಗಳು ಹಾಗೂ ಬ್ಯಾಂಕ್‌ಖಾತೆ ಪಾಸ್‌ಬುಕ್/ಸ್ಟೇಟ್‌ಮೆಂಟ್ ಸಂಬಂಧಿಸಿದ ಹಿಂದಿನ ಆರ್ಥಿಕ ವರ್ಷದ ಪ್ರತಿಗಳನ್ನು ಸಲ್ಲಿಸಬೇಕು.

16. ಯಾವುದೇ ಸಂಸ್ಥೆಗಳ ಅಂಗಸಂಸ್ಥೆಗಳು, ಶಾಖಾ ಘಟಕಗಳು ಪ್ರತ್ಯೇಕವಾಗಿ ಅನುದಾನ ಪಡೆಯಲು ಅರ್ಹವಾಗುವುದಿಲ್ಲ.

17. ಯಾವುದೇ ಸಂಘ-ಸಂಸ್ಥೆಗಳಿಗೆ/ಟ್ರಸ್ಟ್‌ಗಳಿಗೆ ಒಂದು ಆರ್ಥಿಕ ವರ್ಷದಲ್ಲಿ ಒಮ್ಮೆ ಮಾತ್ರ ಧನಸಹಾಯ ನೀಡಲಾಗುವುದು.

18. ಇಲಾಖೆಯಿಂದ ಧನಸಹಾಯವನ್ನು ಅಪೇಕ್ಷಿಸುವ ಸಂಘ-ಸಂಸ್ಥೆಗಳು ಚೆಕ್ ಲಿಸ್ಟಿನಲ್ಲಿ ಕೋರಿರುವಂತೆ ಕ್ರಮವಾಗಿ ದಾಖಲೆಗಳಿಗೆ ಕ್ರಮಸಂಖ್ಯೆ ನಮೂದಿಸಿ ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಆಯಾ ಜಿಲ್ಲಾ ಸಹಾಯಕ ನಿರ್ದೇಶಕರಿಗೆ ಸಲ್ಲಿಸಬೇಕು. ಪತ್ರಿಕಾ ಪ್ರಕಟಣೆಯಲ್ಲಿ ನಿಗದಿಪಡಿಸಿದ ದಿನಾಂಕದಲ್ಲಿ ಸಲ್ಲಿಸಿದ ಅರ್ಜಿಗಳನ್ನು ಮಾತ್ರ ಸ್ವೀಕರಿಸಲಾಗುವುದು.

19. ಧನಸಹಾಯ ಕೋರಿಕೆ ಅರ್ಜಿಗಳನ್ನು ಸಲ್ಲಿಸುವ ಮತ್ತು ಧನಸಹಾಯ ಮಂಜೂರಾತಿ ಪ್ರಕ್ರಿಯೆಯ ವೇಳಾಪಟ್ಟಿ:

ಅ. ಅರ್ಜಿ ಸಲ್ಲಿಸಲು ಪ್ರಾರಂಭದ ದಿನಾಂಕದಿಂದ 25 ದಿನಗಳ ಕಾಲ ದಾಖಲೆಗಳ ಸಹಿತ ಅರ್ಜಿ ಸಲ್ಲಿಸಲು ಅವಕಾಶ ನೀಡುವುದು.

ಆ. ಬಿಟ್ಟು ಹೋದ ದಾಖಲೆಗಳನ್ನು ಸಲ್ಲಿಸಲು ಐದು ದಿನಗಳ ಹೆಚ್ಚುವರಿ ಅವಕಾಶವನ್ನು ಕಲ್ಪಿಸುವುದು.

ಇ. ಅರ್ಜಿದಾರ ಸಂಸ್ಥೆಗೆ ಅರ್ಜಿ ಸಲ್ಲಿಕೆಯ ನಂತರ ಅರ್ಜಿ ಸಂಖ್ಯೆ ಮತ್ತು ಸ್ವೀಕೃತಿ ಹಾಗೂ ಜಿಲ್ಲಾ ಕಚೇರಿಯಲ್ಲಿ ದಾಖಲೆ ಪರಿಶೀಲನೆಗೆ ಸಂದರ್ಶನದ ದಿನಾಂಕವನ್ನು ನಿಗದಿಪಡಿಸುವುದು.

ಈ. ಜಿಲ್ಲಾ ಕಚೇರಿಯಲ್ಲಿ ನಿಗದಿತ ದಿನಾಂಕದಂದು ಜಿಲ್ಲಾ ಹಂತದಲ್ಲಿ ಸಹಾಯಕ ನಿರ್ದೇಶಕರು ಅರ್ಜಿದಾರ ಸಂಸ್ಥೆಯ ದಾಖಲೆಗಳನ್ನು ಮೂಲ ದಾಖಲೆಗಳೊಂದಿಗೆ ಪರಿಶೀಲನೆ ಮಾಡಿ ನಿಗದಿತ ನಮೂನೆಯಲ್ಲಿ ದೃಢೀಕರಿಸುವುದು.

ಉ. ಜಿಲ್ಲಾ ಕಚೇರಿಯಿಂದ ಅರ್ಜಿಯ ಮೇಲೆ ಷರಾ ನಮೂದು ಮಾಡುವುದು.

ಊ. ಷರಾ ನಮೂದಾದ ಅರ್ಜಿಗಳನ್ನು ಕೇಂದ್ರ ಸಮಿತಿಯಿಂದ ಪರಿಶೀಲನೆ ಮಾಡುವುದು.

ಋ. ಕೇಂದ್ರ ಸಮಿತಿಯಿಂದ ದಾಖಲೆ/ ಕಾರ್ಯಕ್ರಮಗಳ ವಿವರಗಳನ್ನು ಪರಿಶೀಲನೆ ಮಾಡುವುದು.

ಎ. ಕೇಂದ್ರ ಸಮಿತಿ ಸಂಸ್ಥೆಯ ಚಟುವಟಿಕೆ ಮತ್ತು ಅರ್ಹತೆಯ ಆಧಾರದ ಮೇಲೆ ಅನುದಾನವನ್ನು ನಿಗದಿ ಪಡಿಸುವುದು.

ಏ. ಕೇಂದ್ರ ಸಮಿತಿ ಸಹಾಯಾನುದಾನವನ್ನು ಸಂಸ್ಥೆ/ ಫಲಾನುಭವಿ ಕಲಾವಿದರ ಖಾತೆಗೆ ಜಮೆ ಮಾಡುವುದು.

20. ಸಂಘ-ಸಂಸ್ಥೆಗಳು ಧನಸಹಾಯ ಪಡೆಯಲು ಸಲ್ಲಿಸಿದ ಅರ್ಜಿಯಲ್ಲಿ ತಪ್ಪು ಮಾಹಿತಿ ನೀಡಿದ್ದಲ್ಲಿ, ಉದ್ದೇಶಿತ ಕಾರ್ಯಕ್ರಮ ನಡೆಸದೆ ದುರುಪಯೋಗ ಮಾಡಿಕೊಂಡಿದ್ದಲ್ಲಿ, ಸಹಾಯಧನ ಬಿಡುಗಡೆ ಆದೇಶದಲ್ಲಿ/ಕರಾರು ಪತ್ರದಲ್ಲಿ ವಿಧಿಸಿದ ಯಾವುದೇ ಷರತ್ತನ್ನು ಉಲ್ಲಂಘನೆ ಮಾಡಿದ್ದಲ್ಲಿ, ಕಾರ್ಯಕ್ರಮವನ್ನು ಮಾಡದೆ ಸುಳ್ಳು ದಾಖಲೆ ಸೃಷ್ಟಿಸಿ ವಂಚನೆ ಮಾಡಿದ ಸಂಸ್ಥೆಯನ್ನು ಸರ್ಕಾರ ಮಂಜೂರು ಮಾಡಿದ ಹಣ ವಸೂಲಾತಿಯೂ ಸೇರಿದಂತೆ ಸೂಕ್ತ ಕಾನೂನು ಕ್ರಮ ಕೈಗೊಳ್ಳುವ ಅಧಿಕಾರವು ಇಲಾಖೆಗೆ ಇರುತ್ತದೆ.

21. ಧನಸಹಾಯ ಪಡೆದಿದ್ದ ಸಂಸ್ಥೆಗಳು ತಮ್ಮ ಚಟುವಟಿಕೆಗಳ ಆಹ್ವಾನಪತ್ರಿಕೆ ಮತ್ತು ವೇದಿಕೆ ಕಾರ್ಯಕ್ರಮ ಹಾಗೂ ಪ್ರಚಾರ ಸಾಮಗ್ರಿಗಳಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಹೆಸರನ್ನು ನಮೂದಿಸಬೇಕು.
22. ಸಂಸ್ಥೆಯು ಇಲಾಖೆಯಿಂದ ಪಡೆದ ಧನಸಹಾಯದಡಿಯಲ್ಲಿ ರೂಪಿಸಿದ ಕಾರ್ಯಕ್ರಮಗಳ ದಾಖಲೆಗಳು, ಪ್ರಕಟಣೆಗಳು, ಕಾರ್ಯಕ್ರಮಗಳ ಆಡಿಯೋ ಮತ್ತು ವಿಡಿಯೋ, ಸ್ಥಿರಚಿತ್ರೀಕರಣ ದಾಖಲೆಗಳನ್ನು ಇಲಾಖೆಯು ಬಳಸಲು ಅಧಿಕಾರ ಹೊಂದಿರುತ್ತದೆ.
23. ವಿಶೇಷ ಸಂದರ್ಭಗಳಲ್ಲಿ ಸರ್ಕಾರವು ಶುದ್ಧ ಸಾಂಸ್ಕೃತಿಕ ವಾತಾವರಣವನ್ನುಂಟು ಮಾಡಬಹುದೆಂದು ಭಾವಿಸಲಾಗುವ ಸಂಸ್ಥೆಗಳಿಗೆ ಆರ್ಥಿಕ ನೆರವು ನೀಡುವ ಅಧಿಕಾರವನ್ನು ಹೊಂದಿರುತ್ತದೆ.

**ಅಸಂಘಟಿತ ಕಲಾವಿದರಿಗೆ ಪ್ರೋತ್ಸಾಹ ಧನಸಹಾಯ ನೀಡಲು ಮಾರ್ಗಸೂಚಿ**

24. ಅಸಂಘಟಿತ ಕಲಾತಂಡಗಳಿಗೆ/ವ್ಯಕ್ತಿಗಳಿಗೆ ಅಗತ್ಯವಾದ ವಾದ್ಯ ಪರಿಕರಗಳು-ವೇಷಭೂಷಣಗಳ ಖರೀದಿಗಾಗಿ ಹಾಗೂ ಚಿತ್ರಕಲೆ-ಶಿಲ್ಪಕಲಾಕೃತಿಗಳ ಪ್ರದರ್ಶನಕ್ಕೆ ಆರ್ಥಿಕ ನೆರವು ಪಡೆಯಲು ನೋಂದಣಿ ಕಡ್ಡಾಯವಲ್ಲ.
25. ಕಲಾವಿದರ ವೇಷಭೂಷಣ ಮತ್ತು ವಾದ್ಯ ಪರಿಕರಗಳ ಖರೀದಿಗೆ ನೀಡುವ ಅನುದಾನದ ಮಿತಿಗರಿಷ್ಠ ರೂ.1.00 ಲಕ್ಷಗಳನ್ನು ಮೀರಬಾರದು.
26. ಚಿತ್ರಕಲೆ, ಶಿಲ್ಪಕಲಾಕೃತಿಗಳ ಪ್ರದರ್ಶನಕ್ಕಾಗಿ ಅರ್ಜಿ ಸಲ್ಲಿಸುವ ಕಲಾವಿದರು ಮಾತ್ರ ತಮ್ಮ ಅರ್ಜಿಯೊಂದಿಗೆ ಕಲಾಕೃತಿಗಳ ಛಾಯಾಚಿತ್ರಗಳನ್ನು ಲಗತ್ತಿಸಬೇಕು. ಯುವಕಲಾವಿದರು ತಮ್ಮ ಕಲಾಕೃತಿಗಳ ಶ್ರೇಷ್ಠತೆ ಹಾಗೂ ಗುಣಮಟ್ಟದ ಬಗ್ಗೆ ಕರ್ನಾಟಕ ಲಲಿತಕಲಾ/ಶಿಲ್ಪಕಲಾ ಅಕಾಡೆಮಿಯಿಂದ ಅಭಿಪ್ರಾಯದೊಂದಿಗೆ ಧೃಡೀಕರಣ ಪತ್ರ ಪಡೆದು ಅರ್ಜಿಯನ್ನು ಸಲ್ಲಿಸಬೇಕು.
27. ಪ್ರದರ್ಶನಕ್ಕೆ ನೀಡಲಾಗುವ ಸಹಾಯಧನದ ಮೊತ್ತವನ್ನು ಚಿತ್ರ/ಶಿಲ್ಪ ಪ್ರದರ್ಶನದ ಸಭಾಂಗಣದ ಬಾಡಿಗೆ, ಚಿತ್ರ/ಶಿಲ್ಪ ಕೃತಿಗಳ ಫ್ರೇಂ ಹಾಕುವ ವೆಚ್ಚಗಳು, ಕಲಾಕೃತಿಗಳ ಪರಿಚಯ ನೀಡುವ ಕ್ಯಾಟಲಾಗ್ ಮುದ್ರಣ, ಕೃತಿಗಳ ಸಾಗಾಣಿಕೆ ವೆಚ್ಚ, ಕಲಾವಿದರ ಪ್ರಯಾಣ ಮತ್ತು ವಸತಿ ವೆಚ್ಚಗಳಿಗೆ ಮಾತ್ರ ಬಳಸತಕ್ಕದ್ದು. ಗರಿಷ್ಠ ಮೊತ್ತವು ಈ ಕೆಳಕಂಡಂತಿರುತ್ತವೆ.
28. ಏಕವ್ಯಕ್ತಿಚಿತ್ರ/ಶಿಲ್ಪಕಲಾ ಪ್ರದರ್ಶನಕ್ಕೆ ರಾಜ್ಯದಲ್ಲಿ ರೂ.50,000 ಮತ್ತು ಹೊರರಾಜ್ಯದಲ್ಲಿ ರೂ.75,000.
29. ಇಲಾಖೆಯ ಸಹಾಯಕ ನಿರ್ದೇಶಕರಿಂದ ಬಂದ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ ಅನುದಾನ ನಿಗದಿಗಾಗಿ ಈ ಕೆಳಕಂಡ ಅನುದಾನ ಮಂಜೂರಾತಿ ಸಮಿತಿ ಮುಂದೆ ನಿರ್ದೇಶಕರು ಮಂಡಿಸುವುದು.

**ಧನಸಹಾಯ ಮಂಜೂರಾತಿ ಆಯ್ಕೆ ಸಮಿತಿ ಈ ಮುಂದಿನಂತೆ ಇರುವುದು.**

1. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ, ಬೆಂಗಳೂರು - ಅಧ್ಯಕ್ಷರು
2. ಆಯುಕ್ತರು/ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ,ಬೆಂಗಳೂರು - ಸದಸ್ಯಕಾರ್ಯದರ್ಶಿ
3. ಸರ್ಕಾರದ ಉಪಕಾರ್ಯದರ್ಶಿ, ಕನ್ನಡ-ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ, ಬೆಂಗಳೂರು - ಸದಸ್ಯರು
4. ಜಂಟಿ ನಿರ್ದೇಶಕರು, (ಧನಸಹಾಯ) ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು - ಸದಸ್ಯರು
5. ಜಂಟಿ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು - ಸದಸ್ಯರು
6. ಜಂಟಿ ನಿರ್ದೇಶಕರು, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ (ಐ.ಟಿ.ಡಿ.ಪಿ), ಬೆಂಗಳೂರು - ಸದಸ್ಯರು
7. ಲೆಕ್ಕ ಪತ್ರಾಧಿಕಾರಿ, ಕನ್ನಡ -ಸಂಸ್ಕೃತಿ ಇಲಾಖೆ, ಬೆಂಗಳೂರು - ಸದಸ್ಯರು
8. ಸಾಹಿತ್ಯ, ಚಿತ್ರಕಲೆ, ಶಿಲ್ಪಕಲೆ, ಸಂಗೀತ-ನೃತ್ಯ, ನಾಟಕ, ಜನಪದ, ಯಕ್ಷಗಾನ ಅಕಾಡೆಮಿ ಅಧ್ಯಕ್ಷರುಗಳು - ಸದಸ್ಯರು

ಈ ಮೇಲ್ಕಂಡ ಸಮಿತಿಯು ಅರ್ಜಿಗಳನ್ನು ಪರಿಶೀಲಿಸಿ, ಸಮಿತಿಯ ನಡಾವಳಿಯ ಆಧಾರದಲ್ಲಿ ಅನುದಾನ ಮಂಜೂರಾತಿ ಆದೇಶಗಳನ್ನು ಹೊರಡಿಸುವುದು. ಇದಕ್ಕೂ ಮೇಲ್ಪಟ್ಟು ಧನಸಹಾಯ ನೀಡುವ ವಿಚಾರವು ಸರ್ಕಾರದ ವಿವೇಚನೆಗೆ ಒಳಪಟ್ಟಿರುತ್ತದೆ.

Malati 3/7/17

(ಪಿ.ಎಸ್. ಮಾಲತಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
(ಸಂಸ್ಕೃತಿ ಶಾಖೆ)